**ಪ್ರಸ್ತಾವನೆ:**

**ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **15–ಪಿಂಜಾರಹೆಗ್ಡಾಳ್ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀಮತಿ ಎಸ್. ಶಾರದಮ್ಮ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಬಳ್ಳಾರಿ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**16.05.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/203(21)/ ಟಿಜಡ್‌ಪಿ/2007, ಬೆಂಗಳೂರು, ದಿನಾಂಕ:26ನೇ ನವೆಂಬರ್, 2007**

ಮೇಲೆ ವಿವರಿಸಿರುವಂತೆ **ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **15–ಪಿಂಜಾರಹೆಗ್ಡಾಳ್** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀಮತಿ ಎಸ್. ಶಾರದಮ್ಮ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**
ಪಿ.ಆರ್.302 ಆಯುಕ್ತರು,
ರಾಜ್ಯ ಚುನಾವಣಾ ಆಯೋಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್.38/ಎಫ್‌ಸಿ/2008, ದಿನಾಂಕ:16ನೇ ಅಕ್ಟೋಬರ್, 2008**

| **ಅರ್ಜಿದಾರರು:** | | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ರೂಪ (29 ವರ್ಷ) W/o ಚಂದ್ರಪ್ಪ<br>2) ಸೂರ್ಯ (ಮೈನರ್) S/o ಚಂದ್ರಪ್ಪ<br>3) ಶ್ರೀಮತಿ ಸೀತಮ್ಮ (52 ವರ್ಷ) W/o ಗಂಗಪ್ಪ<br>ವಾಸ: ಮೆ: ಪ್ರಕಾಶ್ ಇಲೆಕ್ಟ್ರಿಕಲ್ ಕಂ.ಲಿ.,<br>ಹಿಂದುಗಡೆ, ಅಂಬಲಪಾಡಿ, ಉಡುಪಿ. | **ವಿರುದ್ಧ** | 1) ಶ್ರೀಮತಿ ಸುಮತಿ ಕೋಂ ಅಪ್ಪು ಸುವರ್ಣ<br>ವಾಸ: ನೇಜಾರು ಕಲ್ಯಾಣ ಮಂಟಪ, ಉಡುಪಿ.<br>2) ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಶ್ರೀ ರಾಮ್ ಆರ್ಕೆಡಾ, ಹೆಡ್‌ಪೋಸ್ಟ್ ಆಫೀಸ್ ಎದುರು, ಉಡುಪಿ.<br>3) ಮೆ: ಪ್ರಕಾಶ್ ಇಲೆಕ್ಟ್ರಿಕಲ್ಸ್ ಕಂ.ಲಿ., ಅಂಬಲವಾಡಿ, ಉಡುಪಿ. |

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ರೂಪ ಇವರು ತಮ್ಮ ಪತಿಯಾದ ಚಂದ್ರಪ್ಪ ಇವರು ಶ್ರೀಮತಿ ಸುಮತಿ ಕೋಂ ಅಪ್ಪು ಸುವರ್ಣ ಗೌಡ, ನೇಜಾರು ಕಲ್ಯಾಣ ಮಂಟಪ, ಉಡುಪಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:03.12.2007ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಸೋಮಣ್ಣ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್.1201

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

### ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್-32:08-09, ದಿನಾಂಕ:30ನೇ ಸೆಪ್ಟೆಂಬರ್, 2008

**ವಿಷಯ:** ಸಮಾಪನೆಯಲ್ಲಿರುವ ಕುಡಿನೀರಕಟ್ಟೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕುಡಿನೀರಕಟ್ಟೆ ಹೊಳಲ್ಕೆರೆ ತಾಲ್ಲೂಕು ಇದರ ನೊಂದಣಿ ರದ್ಧತಿಯ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನೆ ಆದೇಶ ನಂ.ಡಿಆರ್‌ಡಿ:ಎಲ್‌ಕ್ಯೂಡಿ: ಸಿಆರ್:2005-06, ದಿನಾಂಕ: 26.06.2006.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರಸಂಖ್ಯೆ: ಸನಿ:30:ಎಲ್‌ಕ್ಯೂಡಿ: ಸಿಆರ್:57:2008-09, ದಿನಾಂಕ:30.09.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಈ ಮೇಲ್ಕಂಡ ಸಹಕಾರ ಸಂಘವು ಕ್ರಮಸಂಖ್ಯೆ: ಸನಿ:30:13999/87-88, ದಿನಾಂಕ:14.01.1988 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಳಲ್ಕೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಶೂನ್ಯಗೊಳಿಸಿ, ಸಂಘದ ನೊಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರು ಸಹ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎ:2001: ದಿನಾಂಕ:21.11.2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಹಕಾರ ಸಂಘಗಳ ಉಪನಿಬಂಧಕರು, ಶ್ರೀ ಆರ್. ಶಿವಪ್ರಕಾಶ್, ಆದ ನಾನು ಸಮಾಪನೆಗೊಂಡ ಕುಡಿನೀರಕಟ್ಟೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕುಡಿನೀರಕಟ್ಟೆ ಹೊಳಲ್ಕೆರೆ ತಾಲ್ಲೂಕು ಈ ಸಂಘದ ನೊಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 33 (ಎಸ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ:30.09.2008ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.1173

## UNIVERSITY OF AGRICULTURAL SCIENCES, BANGALORE

## NOTIFICATION

### No.AO/RSP/ C&RR/ T-Series/ PA (Comp.)/ Amendments/ 2008-09, Dated:29th August, 2008

**Sub:** Notification for amendments to Sl.No.(a), (b) Under qualifications to the posts of Programme Assistant (Computer) (Technical Series Posts) in the Cadre and Recruitment Regulations of UAS, Bangalore.

**Ref:** 1) Notification No.AO/RSP/ C&RR/ T-Series/Amendments/ 2008-09, Dated:07.07.2008.

2) ಆದೇಶ ಸಂಖ್ಯೆ: ಆಕ/ ಸಿನೇವಿ/ ವೃನೇನಿ/ ಟಿ-ಪಂಕ್ತಿ/ ತಿದ್ದುಪಡಿ/ 08-09, ದಿನಾಂಕ:29.07.2008.

3) Minutes of the 331th Board Meeting held on 20th August 2008, vide Item-5, under Item-2, Part-A of the Action Taken Report.

In exercise of the power conferred under Statute 32 of UAS, Bangalore and the Board of Regents of the University of Agricultural Sciences, Bangalore and in pursuance of the decision of the Board of Regents referred to above, the following amendments to Sl.No.(a), (b) Under qualifications to the posts of Programme Assistant (Computer) (Technical Series Posts) are made in the Cadre and Recruitments Regulations of UAS, Bangalore as detalied below;

| Sl.No. C&RR | Name of the Post | Qualification | |
|---|---|---|---|
| 167 | Programme Assistant (Computer) | a) B.Sc. (Computer Science)/ Bachelor in Computer Application/ B.Sc./ B.Com. with PG Diploma computer applications of one year minimum duration from a recognized Institute/ University with good academic record with minimum 40% marks.<br>b) Relaxation of 40% to 35% marks is provided for SC/ST category.<br>**Note:** Kannada Knowledge in Computer application is essential. | A Pass in B.Sc. (Computer Science)/ Bachelor in Computer Application<br>Or<br>Any Bachelor degree from a recognized University with one year Diploma in Computer Application.<br>**Note:** Kannada knowledge in Computer application is essential. |

The above amendments shall come into force from the date of approval of the Board of Regents i.e. 20.08.2008.

By Order
Administrative Officer.

PD-99

**PROCEEDINGS FOR THE KARNATAKA STATE BOARD OF WAKFS, BANGALORE**

**Sub:** Appointment of Hereditary Muthawalli for the management of Dargah Hazrath Syed Shah Khalifatur Rahman, Ferozabad, Gulbarga Taluk & District.

**Preamble:**

Whereas, the proposals received from the Wakf Officer, District Wakf Advisory Committee, Gulbarga vide his letter No. DWAC/ GLB/ Appt/3/07-08/205 Dated:18.07.2007 for the appointment of Muthawalli for the management of the above Wakf.

A Public Notice was issued by this office on 28.07.2007 for inviting objections/ Suggestions from the locality on the said proposal.

Whereas, the Wakf Officer, District Wakf Advisory Committee, Gulbarga while forwarding the mahazar drawn on 04.08.2007 by the Wakf Inspector, has requested this office to approve the appointment of Muthawalli as proposed since no objections/ suggestions were received within the stipulated period. Moreover, this office has also not received any objections/ suggestions.

And whereas, this subject was placed before the Board in its meeting held on 01.09.2007. The Board after careful consideration vide its Resulution No.24. at Sl.No.01 of Regular Agenda has accorded its approval for appointment of Muthawalli as proposed. Hence this Order.

**Order No.KBW/CMC/23/ GBA/ 07-08, Dated:17th September, 2007**

In exercise of the powers conferred under Section 63 of the Wakf Act 1995 the Karnataka State Board of Wakfs, hereby appoints Mr. Habeebur Rahman @ Mubean Baba S/o Late Abdul Hai as Hereditary Muthawalli for the management of Dargah Hazrath Syed Shah Khalifatur Rahman, Ferozabad, Gulbarga Taluk & District.

The Muthawalli shall function in accordance with the Wakf Act, 1995 and Karnataka Wakf Rules 1997, and the direction issued by Karnataka State Board of Wakfs, Bangalore, from time to time.

BY ORDER OF THE BOARD,
Addl. Chief Executive Officer,
Karnataka State Board of Wakfs.

PD-100